# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

ರಿಜಿಸ್ಟರ್ಡ್ ನಂ. ಕೆಆರ್ಎನ್ಎಸ್ -19

5ನೇ ವರ್ಷ 15ನೇ ಸಂಚಿಕೆ ಕೊಪ್ಪ 21-12-1986 ಭಾನುವಾರ ಬೆಲೆ 20 ಪೈಸೆ




### ಶೃಂಗೇರಿ ವಿ|| ಕ್ಷೇತ್ರದ 3 ತಾಲ್ಲೂಕುಗಳಿಂದ ಜಿಲ್ಲಾ ಪರಿಷತ್ತಿನ

## 6 ಸ್ಥಾನಗಳಿಗೆ 31 ನಾಮಪತ್ರ

ಕೊಪ್ಪ: ಜಿಲ್ಲಾ ಪರಿಷತ್ತಿಗೆ ಈ ತಾಲ್ಲೂಕಿನಿಂದ ಇರುವ ಮೂರು ಕ್ಷೇತ್ರಗಳ ಪೈಕಿ ಕೊಪ್ಪದಿಂದ ಕಾಂಗ್ರೆಸ್ ಅಭ್ಯರ್ಥಿಯಾಗಿರುವ ಬಿ.ಜಿ. ಚಿದಂಬರ್, ಜನತಾ ಅಭ್ಯರ್ಥಿ ಕೆ.ಎಸ್. ಕಾಡಪ್ಪ ಗೌಡ ಮತ್ತು ಸಿ.ಪಿ.ಐ ಅಭ್ಯರ್ಥಿ ಎಲ್.ಆರ್. ರಾಮಚಂದ್ರ, ಜಯಪುರ ಮೀಸಲು ಕ್ಷೇತ್ರದಿಂದ ಕಾಂಗ್ರೆಸಿನ ಮಾಸ್ತಿ ಮತ್ತು ಜನತಾದ ಶೇಖರ್ ಹಾಗೂ ಹರಿಹರಪುರ ಮಹಿಳಾ ಮೀಸಲು ಕ್ಷೇತ್ರದಿಂದ ಜನತಾದ ಜಯಲಕ್ಷ್ಮಿ ಎ.ಬಿ. ವಾಸಪ್ಪ ಮತ್ತು ಕಾಂಗ್ರೆಸಿನ ಎಚ್.ಎಸ್. ಸುಮಿತ್ರಮ್ಮ ತಮ್ಮ ನಾಮಪತ್ರಗಳನ್ನು ಸಲ್ಲಿಸಿದ್ದಾರೆ.

ಇವರಲ್ಲದೆ ಪಕ್ಷೇತರರು ಹಾಗೂ ಡಮ್ಮಿ ಅಭ್ಯರ್ಥಿಗಳು ಸೇರಿದಂತೆ ಜಯಮ್ಮ ಮತ್ತು ಇಂದಿರಮ್ಮ ಎಂಬವರು ಹರಿಹರಪುರದಿಂದಲೂ, ತಿಮ್ಮಯ್ಯ ಮತ್ತು ವೆಂಕ ಎಂಬವರು ಜಯಪುರದಿಂದಲೂ, ಎ.ವಿ. ಆನಂದರಾಮ ಭಟ್ಟ, ಕೆ. ವಿಜಯ ಅಜಲ, ಕೆ ಎಸ್ ಸೀತಾರಾಂ ಹಾಗೂ ಎಚ್. ದಯಾನಂದ ಇವರುಗಳು ಕೊಪ್ಪದಿಂದಲೂ ನಾಮಪತ್ರಗಳನ್ನು ಸಲ್ಲಿಸಿದ್ದಾರೆ.

ಶೃಂಗೇರಿ ತಾಲ್ಲೂಕಿನ ಏಕೈಕ ಕ್ಷೇತ್ರದಿಂದ ಜನತಾದ ಕೆ.ಎಂ. ಶ್ರೀನಿವಾಸ್ ಮತ್ತು ಕಾಂಗ್ರೆಸ್‌ನ ಕೆ.ವಿ. ರಾಮಪ್ಪಯ್ಯ ಹಾಗೂ ಶ್ರೀಕಂಠಗೌಡ, ಡಾ|| ಮಂಜಪ್ಪ ಗೌಡ, ಅನಂತ ಪದ್ಮನಾಭ ಇವರುಗಳು ನಾಮಪತ್ರಗಳನ್ನು ಸಲ್ಲಿಸಿದ್ದಾರೆ.

ನರಸಿಂಹರಾಜಪುರ ತಾಲ್ಲೂಕಿನ ಕಸಬಾ ಕ್ಷೇತ್ರದಿಂದ ಕಾಂಗ್ರೆಸಿನ ಅಧಿಕೃತ ಅಭ್ಯರ್ಥಿ ಟಿ.ವಿ. ವರ್ಗೀಸ್ (ರಾಜು), ಜನತಾದ ಮೀಗಾ ಚಂದ್ರಶೇಖರ್, ಸಿಪಿಐನ ಎಂ.ಎಲ್. ಸೇವಿಯರ್, ಬಿಜೆಪಿಯ ಕೆ. ಎಸ್. ಸುರೇಶ್ ಇವರಲ್ಲದೆ ಎಚ್. ಜಿ. ಅಬ್ದುಲ್ ಸಮದ್ ಮತ್ತು ಎ. ಜಿ. ಬೆಳ್ಳಯ್ಯ ಗೌಡ ನಾಮಪತ್ರ ಸಲ್ಲಿಸಿದ್ದಾರೆ.

ಬಾಳೆಹೊನ್ನೂರಿನಿಂದ ಕಾಂಗ್ರೆಸ್ಸಿನ ಬಿ.ಸಿ. ಗೀತಾ, ಜನತಾದ ಕೆ.ಎ. ಶಾರದಾ ಅಲ್ಲದೆ ಶೈನಾಜ, ಸಿ.ಎಂ. ಬಾಲಮ್ಮ, ಶಾರದಮ್ಮ ನಾಮಪತ್ರಗಳನ್ನು ಸಲ್ಲಿಸಿದ್ದಾರೆ.

ಡಿ. 21ರಂದು ನಡೆದ ಪರಿಶೀಲನೆಯ ನಂತರ ಈ ಎಲ್ಲಾ ನಾಮಪತ್ರಗಳೂ ಅಂಗೀಕೃತವಾಗಿವೆ. ಡಿ. 22 ನಾಮಪತ್ರಗಳನ್ನು ಹಿಂತೆಗೆದುಕೊಳ್ಳಲು ಕಡೆಯ ದಿನವಾಗಿದೆ.

ಜನವರಿ 2ನೇ ತಾರೀಖು ಶುಕ್ರವಾರ ಬೆಳಿಗ್ಗೆ 8ರಿಂದ ಸಂಜೆ 4ರವರೆಗೆ ಚುನಾವಣೆ ನಡೆಯಲಿದೆ.

### ಇಂಫಾಲದಲ್ಲಿ ನಾಯಕತ್ವ ತರಬೇತಿ ಪಡೆದ ಕೆಡೆಟ್

## ಟಿ. ಸಿ. ರಾಜೇಂದ್ರ

ಶೃಂಗೇರಿ: ಇಲ್ಲಿನ ಜೆ.ಸಿ.ಬಿ.ಎಂ. ಕಾಲೇಜಿನ ಬಿ.ಎಸ್ಸಿ. ವಿದ್ಯಾರ್ಥಿ ಎನ್.ಸಿ.ಸಿ. ಸಾರ್ಜೆಂಟ್ ಆಗಿರುವ ಟಿ. ಸಿ. ರಾಜೇಂದ್ರ ಅವರು ಇತ್ತೀಚೆಗೆ ಮಣಿಪುರದಲ್ಲಿ ನಡೆದ ನಾಯಕತ್ವ ತರಬೇತಿ ಶಿಬಿರದಲ್ಲಿ ಪಾಲ್ಗೊಂಡಿದ್ದರು. ಭಾರತ ಬರ್ಮಾ ಗಡಿಗೆ ಹೊಂದಿಕೊಂಡೂ ನಡೆದ ಈ ಶಿಬಿರದಲ್ಲಿ ಸುಮಾರು 300 ಕೆಡೆಟ್‌ಗಳು ಭಾಗವಹಿಸಿದ್ದರು. ಕರ್ನಾಟಕದಿಂದ ಭಾಗವಹಿಸಿದ 20 ಕೆಡೆಟ್‌ಗಳಲ್ಲಿ ರಾಜೇಂದ್ರ ಒಬ್ಬರು. ಶಿಬಿರದಲ್ಲಿ ಕರ್ನಾಟಕದ ಕೆಡೆಟ್‌ಗಳು ಡ್ರಿಲ್ ಮತ್ತು ಕ್ರಾಸ್‌ಕಂಟ್ರಿ ಸ್ಪರ್ಧೆಗಳಲ್ಲಿ ಪ್ರಥಮ ಬಹುಮಾನ ಗಳಿಸಿ ಕರ್ನಾಟಕಕ್ಕೆ ಕೀರ್ತಿ ತಂದಿದ್ದಾರೆ

ರಾಜೇಂದ್ರ ಹರಿಹರಪುರ ಹೋಬಳಿ, ಹೊಸೂರು ಗ್ರಾಮದ ತಾಳಕಾನೆ ಚಿನ್ನೇನಾಯ್ಕರ ಮಗ.

### ಕಾವ್ಯವಾಚನ

ಹರಿಹರಪುರ: ಇಲ್ಲಿನ ರಾಷ್ಟ್ರೋತ್ಥಾನ ಬಳಗದ ಆಶ್ರಯದಲ್ಲಿ ಮಲ್ಲೇಶಯ್ಯನವರ ಧರ್ಮಛತ್ರದಲ್ಲಿ ಡಿ. 13ರಂದು ಗಮಕ ಪ್ರವೀಣ ಹೊಸಹಳ್ಳಿ ಕೇಶವಮೂರ್ತಿಯವರ ಕಾವ್ಯವಾಚನ ಏರ್ಪಡಿಸಲಾಗಿತ್ತು. ಕೆ.ಎನ್. ಮಾರ್ಕಂಡೇಯ ಅವಧಾನಿಗಳು ವ್ಯಾಖ್ಯಾನ ಮಾಡಿದರು.

### ಹರಿಜನರ ದರ್ಖಾಸ್ತು ಭೂಮಿ, ಸೊಪ್ಪಿನ ಬೆಟ್ಟ ಪರಭಾರೆಗೆ ಗ್ರಾಮಸ್ಥರ ವಿರೋಧ

ಹರಿಹರಪುರ: ಇಲ್ಲಿಗೆ ಸಮೀಪದ ಅದ್ದಡ ಗ್ರಾಮದ ಸ ನಂ. 133ರಲ್ಲಿ ಅಲ್ಲಿನ 4 ಮಂದಿ ಹರಿಜನರಿಗೆ ತಲಾ 2 ಎಕರೆಯಂತೆ ಮಂಜೂರಾಗುವ ಸಿದ್ಧತೆಯಲ್ಲಿದ್ದ ಭೂಮಿ ಹಾಗೂ ಅದರ ನೆರೆಯ ಸ.ನಂ. 137ರಲ್ಲಿ ಅರಣ್ಯ ಇಲಾಖೆಯವರು ಊರಿನವರಿಗೆ ಸೊಪ್ಪಿನ ಬೆಟ್ಟವಾಗ ಉಳಿಸಿರುವ ಭೂಮಿ— ಇವುಗಳಲ್ಲಿ ಸಿಗದಾಳಿನ ಎಸ್.ಪಿ. ರಮೇಶ್ ಮತ್ತು ಕೊಪ್ಪದ ಬದ್ರಿಯಾ ಹೋಟೆಲ್‌ನವರಿಗೆ ಜಮೀನು ಮಂಜೂರು ಮಾಡುವ ವಿಚಾರ ಖಚಿತವಾಗಿ ತಿಳಿದುಬಂದಿದ್ದು ಇದನ್ನು ಕೂಡಲೇ ರದ್ದುಪಡಿಸಬೇಕು ಎಂದು ಒತ್ತಾಯಿಸಿ, ಗ್ರಾಮದ ರೈತ ಸಮುದಾಯ ಜಿಲ್ಲಾಧಿಕಾರಿಯವರಿಗೆ ಮನವಿ ಸಲ್ಲಿಸಿದೆ.

### ಚುನಾವಣಾ ಪ್ರಚಾರಕ್ಕೆ

## ಹೆಗಡೆ, ಆಸ್ಕರ್

ಕೊಪ್ಪ: ಶೃಂಗೇರಿ ವಿಧಾನಸಭಾ ಕ್ಷೇತ್ರದಲ್ಲಿ ಚುನಾವಣಾ ಪ್ರಚಾರಕ್ಕಾಗಿ ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆ ಡಿ. 22ರಂದು ಹಾಗೂ ರಾಜ್ಯ ಕಾಂಗ್ರೆಸ್ ಅಧ್ಯಕ್ಷ ಆಸ್ಕರ್ ಫರ್ನಾಂಡಿಸ್ ಡಿ. 23ರಂದು ಬರಲಿದ್ದಾರೆ.

ಹೆಗಡೆ ತೀರ್ಥಹಳ್ಳಿಯಿಂದ ಕೊಪ್ಪ, ಶೃಂಗೇರಿ, ಜಯಪುರ, ಬಾಳೆಹೊನ್ನೂರುಗಳಲ್ಲಿ ಪ್ರವಾಸ ಮಾಡುವ ಕಾರ್ಯಕ್ರಮವಿದ್ದು, ನರಸಿಂಹರಾಜಪುರಕ್ಕೂ ಕರೆದೊಯ್ಯುವ ಪ್ರಯತ್ನ ನಡೆಯುತ್ತಿದೆ ಎನ್ನಲಾಗಿದೆ. ಆಸ್ಕರ್ ಫರ್ನಾಂಡಿಸ್ ನ. ರಾ. ಪುರದಲ್ಲಿ ಮಧ್ಯಾಹ್ನ 11.30ಕ್ಕೆ ಬಹಿರಂಗ ಸಭೆಯಲ್ಲಿ ಭಾಗವಹಿಸಿ ನಂತರ ಕೊಪ್ಪ, ಜಯಪುರ ಮಾರ್ಗವಾಗಿ ಕಳಸ, ಬಾಳೆಹೊನ್ನೂರುಗಳ ಸಭೆಗಳಲ್ಲಿ ಭಾಗವಹಿಸಲು ತೆರಳುವರು.

### ಬ್ಯಾಂಕ್ ಸಾಲ, 'ನಬಾರ್ಡ್' ಯೋಜನೆಗಳ ಬಗ್ಗೆ

## ಕೊಪ್ಪದಲ್ಲಿ ಮಾಹಿತಿ ಕಾರ್ಯಕ್ರಮ

ಕೊಪ್ಪ: ರಾಷ್ಟ್ರೀಯ ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ (ನಬಾರ್ಡ್)ನ ವಿವಿಧ ಯೋಜನೆಗಳು ಮತ್ತು ವಿವಿಧ ಬ್ಯಾಂಕುಗಳಿಂದ ದೊರೆಯುವ ಸಾಲ-ಸೌಲಭ್ಯಗಳ ಬಗ್ಗೆ ಮಾಹಿತಿ ನೀಡುವ ಕಾರ್ಯಕ್ರಮವೊಂದು ಇಲ್ಲಿನ ಜಲಜಾಕ್ಷಮ್ಮ ಕಲ್ಯಾಣ ಮಂಟಪದಲ್ಲಿ ಡಿ. 28ರ ಭಾನುವಾರ ಮಧ್ಯಾಹ್ನ 3 ಗಂಟೆಗೆ ಏರ್ಪಾಡಾಗಿದೆ. ಕರ್ನಾಟಕ ಬ್ಯಾಂಕಿನ ಅಸಿಸ್ಟೆಂಟ್ ಜನರಲ್ ಮ್ಯಾನೇಜರ್ ಎಂ. ಎಸ್. ಕೃಷ್ಣ ಭಟ್ ಈ ಮಾಹಿತಿ ನೀಡಲಿದ್ದಾರೆ.

ಅಂದು ಸಂಜೆ ಕರ್ನಾಟಕ ಬ್ಯಾಂಕಿನ ಅಧ್ಯಕ್ಷರು, ಮಾಜಿ ಅಧ್ಯಕ್ಷರು ಹಾಗೂ ಎಲ್ಲಾ 12 ಜನ ನಿರ್ದೇಶಕರಿಗೆ ಕೊಪ್ಪ, ಶೃಂಗೇರಿ, ನ. ರಾ. ಪುರ ತಾ|| ಗಳ ಗ್ರಾಹಕರ ವತಿಯಿಂದ ಸನ್ಮಾನ ಸಮಾರಂಭ ನಡೆಯುತ್ತದೆ.

ಅಂದು ಬೆಳಿಗ್ಗೆ ಕೊಡ್ಗಿಹಿತ್ಲಿನಲ್ಲಿ ನಡೆಯಲಿರುವ ಬ್ಯಾಂಕಿನ ಈ ತಿಂಗಳ ನಿರ್ದೇಶಕ ಮಂಡಳಿ ಸಭೆಗಾಗಿ ಇವರೆಲ್ಲ ಆಗಮಿಸಲಿದ್ದಾರೆ.

### ರೈತರು 'ಸಿ ಅಂಡ್ ಡಿ' ಭೂಮಿ ಬಳಸಲು

## ಅಡ್ಡಿಪಡಿಸದಂತೆ ಹೈಕೋರ್ಟ್ ಆಜ್ಞೆ

ಕೊಪ್ಪ: ಈವರೆಗೆ ಸಾರ್ವಜನಿಕರ ಉಪಯೋಗಕ್ಕೆ ಮೀಸಲಿಟ್ಟಿದ್ದ, ಸರ್ಕಾರಕ್ಕೆ ಸೇರಿದ 'ಸಿ ಮತ್ತು ಡಿ' ವರ್ಗದ ಭೂಮಿಯ ಪ್ರಯೋಜನವನ್ನು ರೈತರು ಪಡೆದುಕೊಳ್ಳುವುದಕ್ಕೆ ಅಡ್ಡಿಪಡಿಸಬಾರದೆಂದು ಶಿವಮೊಗ್ಗ ಜಿಲ್ಲಾಧಿಕಾರಿಗಳಿಗೆ ರಾಜ್ಯ ಹೈಕೋರ್ಟಿನ ನ್ಯಾಯಮೂರ್ತಿ ಪಿ ಪಿ. ಬೋಪಣ್ಣ ಆದೇಶಿಸಿದ್ದಾರೆ.

ಸಾಗರ ತಾಲ್ಲೂಕಿಗೆ ಸಂಬಂಧಪಟ್ಟಂತೆ ಈ ತೀರ್ಪನ್ನು ನ್ಯಾಯಮೂರ್ತಿಗಳು ಸಾಗರದ ಶರಾವತಿ ವಲಯ ಯುವಜನ ಒಕ್ಕೂಟ ಮತ್ತಿತರರು ಸಲ್ಲಿಸಿದ್ದ ರಿಟ್ ಅರ್ಜಿಯ ವಿಚಾರಣೆಯ ನಂತರ ನ. 25ರಂದು ನೀಡಿದ್ದಾರೆ

ಅರ್ಜಿಯಲ್ಲಿ ರಾಜ್ಯ ಸರ್ಕಾರ (ಅರಣ್ಯ ಇಲಾಖೆ), ಕರ್ನಾಟಕ ಅರಣ್ಯ ಪ್ಲಾಂಟೇಶನ್ ನಿಗಮ, ಕರ್ನಾಟಕ ಪಲ್ಪ್‌ವುಡ್ ಮತ್ತು ಶಿವಮೊಗ್ಗ ಜಿಲ್ಲಾಧಿಕಾರಿಗಳನ್ನು ಪ್ರತಿವಾದಿಗಳನ್ನಾಗಿ ಮಾಡಲಾಗಿತ್ತು

### ಪ್ರೌಢಶಾಲಾಕ್ರೀಡಾಕೂಟದ ಉಳಿತಾಯದ ಹಣದಿಂದ ಕ್ರೀಡಾಭಿವೃದ್ಧಿಗೆ ಠೇವಣಿ

ಕೊಪ್ಪ: ಇಲ್ಲಿನ ಕಿರಿಯ ಕಾಲೇಜಿನ ಆಶ್ರಯದಲ್ಲಿ ಕಳೆದ ತಿಂಗಳು ನಡೆದ ಜಿಲ್ಲಾ ಮಟ್ಟದ ಪ್ರೌಢಶಾಲಾ ಕ್ರೀಡಾಕೂಟಕ್ಕಾಗಿ ಸಾರ್ವಜನಿಕರಿಂದ ಸಂಗ್ರಹಿಸಲಾಗಿದ್ದ ವಂತಿಗೆಯಲ್ಲಿ ಸುಮಾರು 10 ಸಾವಿರ ರೂ. ಗಳಷ್ಟು ಹಣ ಉಳಿದಿದ್ದು, ಇದರಲ್ಲಿ 5 ಸಾವಿರ ರೂ. ಗಳನ್ನು ಕಾಲೇಜಿನಲ್ಲಿ ನಿರ್ಮಿಸಲು ಉದ್ದೇಶಿಸಿರುವ ಬಯಲು ರಂಗಮಂದಿರಕ್ಕೂ, 1 ಸಾವಿರ ರೂ. ಗಳನ್ನು ಕಾಲೇಜು ಬ್ಯಾಂಡ್ ಸೆಟ್ಟಿನ ಅಭಿವೃದ್ಧಿಗೂ ನೀಡಿ, ಉಳಿದ ಹಣವನ್ನು ತಾ|| ಕ್ರೀಡಾಭಿವೃದ್ಧಿ ಸಮಿತಿಯಲ್ಲಿಟ್ಟು ಅದರ ಮುಂದಿನ ಕಾರ್ಯಕ್ರಮಗಳಿಗಾಗಿ ಠೇವಣಿಯಾಗಿಟ್ಟುಕೊಳ್ಳುವುದೆಂದು ಎ. ಮನೋಹರರಾವ್ ಅವರ ಅಧ್ಯಕ್ಷತೆಯಲ್ಲಿ ಕಾಲೇಜಿನಲ್ಲಿ ನಡೆದ ಸಾರ್ವಜನಿಕರ ಸಭೆಯಲ್ಲಿ ತೀರ್ಮಾನಿಸಲಾಯಿತು.

## ಓದುಗರ ಪತ್ರಗಳು

### ಕೊಳವೆ ಬಾವಿ ಕೆಟ್ಟು ಒಂದು ವರ್ಷವಾಗಿದೆ !

ಮಾನ್ಯರೆ,

ಕೊಪ್ಪ ತಾ॥ ಕುದುರೆಗುಂಡಿ ಪ್ರೌಢ ಶಾಲೆಯ ಎದುರಿನ ಕೊಳವೆಬಾವಿ ಹಾಳಾಗಿ ಒಂದು ವರ್ಷವಾಗಿದೆ. ಇನ್ನೂ ಅದರ ರಿಪೇರಿ ಕಾರ್ಯ ಕೈಗೊಂಡಿಲ್ಲ. ಇದರಿಂದ ಶಾಲಾ ವಿದ್ಯಾರ್ಥಿಗಳಿಗೆ ಕುಡಿಯಲು ಇದ್ದ ಏಕೈಕ ಆಸರೆಯೂ ತಪ್ಪಿ ಹೋಗಿದ್ದು, ಮಕ್ಕಳು ನೀರಿಗೋಸ್ಕರ ಬಹಳ ದೂರ ಹೋಗಬೇಕಾಗಿದೆ. ಆದ್ದರಿಂದ ಸಂಬಂಧ ಪಟ್ಟವರು ಕೂಡಲೇ ಕೊಳವೆ ಬಾವಿ ಸರಿ ಪಡಿಸಬೇಕಾಗಿ ಕೋರುತ್ತೇನೆ

ವಿದ್ಯಾರ್ಥಿಗಳ ಪರವಾಗಿ,

**ವೈ. ಎಸ್ ರಾಧಾಕೃಷ್ಣ,**

### ಸಣ್ಣ ಮಟ್ಟದ ಕಳ್ಳರು?

ಮಾನ್ಯರೆ,

ಅಗಳಗಂಡಿಗೆ ಸಮೀಪದ ಕಚಿಗೆಯಲ್ಲಿ ಕಳೆದ ಗುರುವಾರ ರಾತ್ರಿ 9 ಗಂಟೆಯ ಸಮಯದಲ್ಲಿ ಇಬ್ಬರು ವ್ಯಕ್ತಿಗಳು ರಿಕ್ಷಾದಲ್ಲಿ ನಂಬಿ ಎಂಬವರ ಮನೆಗೆ ಬಂದು ಹೊರಗಡೆ ಇದ್ದ ಮಣ್ಣಿನ ಮಡಿಕೆ ಎತ್ತತೊಡಗಿದಾಗ, ಅಲ್ಲಿಯ ಯಜಮಾನ ಎದ್ದು "ಯಾರು ?" ಎಂದು ವಿಚಾರಿಸಿದೊಡನೆ ಅವರುಗಳು ಓಡಿ ಹೋಗಿ ರಿಕ್ಷಾದಲ್ಲಿ ಜಯಪುರದ ಕಡೆಗೆ ಪಲಾಯನ ಮಾಡಿದರು.

ಇದು ಸಣ್ಣಪುಟ್ಟ ಕಳ್ಳತನ ಎಸಗುವವರ ಕೃತ್ಯವಿರಬಹುದಾಗಿದ್ದು, ಸಂಬಂಧಪಟ್ಟವರು ಇದಕ್ಕೆ ಅವಕಾಶವಾಗದಂತೆ ಏರ್ಪಾಡು ಮಾಡಬೇಕಾಗಿ ಕೋರುತ್ತೇನೆ

**ಕೆ.ಬಿ. ಸುಂದರ, ಕಚಿಗೆ.**

# ಜಿಲ್ಲಾ ಯುವಜನ ಮೇಳ — ಉತ್ತಮ - ಕಳಪೆ ಸ್ಪರ್ಧೆಗಳ 'ಮಿಶ್ರಪಾಕ'

ಮಲೆನಾಡಿನ ಕೇಂದ್ರವಾದ ಕೊಪ್ಪದಲ್ಲಿ ಚಿಕ್ಕಮಗಳೂರು ಜಿಲ್ಲಾಮಟ್ಟದ ಯುವಜನ ಮೇಳ ಡಿ. 7, 8, 9ರಂದು ಯಶಸ್ವಿಯಾಗಿ ನಡೆಯಿತು. ಶಾಸಕ ಎಚ್.ಜಿ ಗೋವಿಂದಗೌಡರ ಅಧ್ಯಕ್ಷತೆಯಲ್ಲಿ ಜಿಲ್ಲಾಧಿಕಾರಿ ಬಿ. ಪಾರ್ಥಸಾರಥಿಯವರು ಮೇಳವನ್ನು ಉದ್ಘಾಟಿಸಿದರು. ಮುಖ್ಯ ಅತಿಥಿಗಳಾಗಿದ್ದ ಬಿ.ಆರ್. ಪ್ರಾಜೆಕ್ಟ್ ಸ್ನಾತಕೊತ್ತರ ಕೇಂದ್ರದ ಕನ್ನಡ ಉಪನ್ಯಾಸಕ ತೀ.ನಂ. ಶಂಕರನಾರಾಯಣ ಅವರು ಜನಪದ ಕಲೆಗಳು ಹಾಗೂ ಯುವಜನರ ಬಗ್ಗೆ ಉಪನ್ಯಾಸ ನೀಡಿದರು.

ಮುಕ್ತಾಯ ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಬಾಳೆಹೊನ್ನೂರಿನ ಕಾಫಿ ಬೆಳೆಗಾರರಾದ ಎಚ್.ಬಿ. ರಾಜಗೋಪಾಲ್ ವಿಜೇತರಿಗೆ ಬಹುಮಾನ ವಿತರಣೆ ಮಾಡಿದರು. ಮುಖ್ಯ ಅತಿಥಿಗಳಾಗಿದ್ದ ಹಿರೇಮಗಳೂರು ಕಣ್ಣನ್ ಮಲೆನಾಡಿನ ಪ್ರಕೃತಿ ಮತ್ತು ಕವಿಗಳ ಬಗ್ಗೆ ಮಾತನಾಡಿ ಸಭಿಕರನ್ನು ಮಂತ್ರಮುಗ್ಧರನ್ನಾಗಿಸಿದರು. ತೀರ್ಪುಗಾರರಾಗಿದ್ದ ಕವಿರಾಜ್, ಜಿ. ಶ್ರೀನಿವಾಸ್ ಮತ್ತು ಹೂವಿನಹಡಗಲಿ ಸ್ಪರ್ಧೆಗಳ ಬಗ್ಗೆ ಮಾತನಾಡಿದರು. ಜಿಲ್ಲಾ ಯುವಜನ ಸೇವಾಧಿಕಾರಿ ಎ. ಆರ್. ಮಂಜುನಾಥ್ ಸ್ವಾಗತಿಸಿ, ತಹಸೀಲ್ದಾರ್ ಆರ್. ಶ್ರೀನಿವಾಸ್ ವಂದಿಸಿದರು.

### ಮೇಳದ ವ್ಯವಸ್ಥೆಯ ಬಗ್ಗೆ

ಮೇಳದ ವ್ಯವಸ್ಥೆ ಮತ್ತು ಊಟ, ವಸತಿ ವ್ಯವಸ್ಥೆಗಳು ಸಾಕಷ್ಟು ಚೆನ್ನಾಗಿದ್ದವು ಸ್ಪರ್ಧೆಗಳ ತೀರ್ಪುಗಾರರು ಪೂರ್ವಗ್ರಹ ಪೀಡಿತರಾಗದೆ ನ್ಯಾಯವಾದ ತೀರ್ಪುಗಳನ್ನು ನೀಡಿದರು. ಸ್ಪರ್ಧೆಗಳು ಶಾಂತಿಯುತವಾಗಿ ನಡೆದು, ಕಾರ್ಯಕ್ರಮಗಳು ಕೊಪ್ಪದ ಜನರಿಗೆ ಉತ್ತಮ ಮನರಂಜನೆ ಒದಗಿಸಿದವು.

### ಸ್ಪರ್ಧೆಗಳ ಬಗ್ಗೆ

ಇಲ್ಲಿ ಸ್ಪರ್ಧಿಸಿದವರು ಈ ಮೊದಲು ಆಯಾ ತಾ॥ ಮಟ್ಟದ ಸ್ಪರ್ಧೆಗಳಲ್ಲಿ ಮೊದಲ ಸ್ಥಾನ ಪಡೆದವರು. ಆದರೆ, ಸ್ಪರ್ಧೆಗಳಲ್ಲಿ ಕೆಲವು ಉತ್ತಮ ಮಟ್ಟದಲ್ಲಿದ್ದರೆ, ಇನ್ನು ಕೆಲವು ತೀರಾ ಕಳಪೆಯಾಗಿದ್ದವು. ಲಾವಣಿ, ಗೀಗೀ ಪದಗಳು ನಿಜವಾದ ಜಾನಪದ ಶೈಲಿಯಲ್ಲಿರದೆ, ಆಧುನಿಕ ರೀತಿಯಲ್ಲಿದ್ದವು. ಡೊಳ್ಳು ಕುಣಿತ, ಸೋಬಾನೆ ಪದ ಮುಂತಾದವು, 'ಇದೊಂದು ಜಿಲ್ಲಾ ಮಟ್ಟದ ಸ್ಪರ್ಧೆಯೆ ?' ಎನ್ನಿಸುವಂತಿದ್ದವು. ಜಾನಪದ ನೃತ್ಯಗಳಲ್ಲಿ ಸ್ವತಂತ್ರ ಕಲ್ಪನೆ, ತಕ್ಕಮಟ್ಟಿನ ತಾಲೀಮು ಇದ್ದಂಥವು ಕೇವಲ ಒಂದೆರಡು ಮಾತ್ರ. ಉಳಿದವೆಲ್ಲ ಕೇವಲ ಪ್ರಾಥಮಿಕ ಶಾಲಾ ಮಕ್ಕಳ ನೃತ್ಯಗಳಂತಿದ್ದವು. ವೀರಗಾಸೆ ನೃತ್ಯ, ಕೋಲಾಟ, ಭಾವಗೀತೆ, ಭಜನೆ ಮುಂತಾದುವುಗಳಲ್ಲಿ ಮಾತ್ರ ರಾಜ್ಯ ಮಟ್ಟದಲ್ಲಿ ಹೆಚ್ಚಿನ ಫಲಿತಾಂಶ ನಿರೀಕ್ಷಿಸಬಹುದು.

ಒಟ್ಟಿನಲ್ಲಿ ಬಹುತೇಕ ಸ್ಪರ್ಧೆಗಳು ಒಳ್ಳೆಯ ಅಭ್ಯಾಸ, ಸಿದ್ಧತೆಗಳೊಂದಿಗೆ ಭಾಗವಹಿಸಿದರೆ ಮಾತ್ರ ಉತ್ತಮವಾಗಬಲ್ಲವು. ಹಾಗೆಯೇ ಸ್ಪರ್ಧಿಗಳು ಸಮಯಕ್ಕೆ ಸರಿಯಾಗಿ ಸಿದ್ಧರಾಗಿರುವುದಕ್ಕೂ ಹೆಚ್ಚಿನ ಗಮನ ನೀಡಬೇಕಾಗಿದೆ.

**—ಎಚ್.ಎ. ಶ್ರೀನಿವಾಸ್,** ಎಂ.ಎ

# ಶಾಂತಿಪುರದಲ್ಲಿ ಎರಡು ದುರ್ಮರಣ

ಹೇರೂರು: ಇಲ್ಲಿಗೆ ಸಮೀಪದ ಶಾಂತಿಪುರ (ದೂಬಳಕೈಮರ) ಬಳಿ ಡಿ. 13ರಂದು ಸಾರಂಗ ಎಂಬ ಕೃಷಿಕಾರ್ಮಿಕನಿಗೆ ಬಾಳೆಹೊನ್ನೂರಿನ ವ್ಯಾಪಾರಸ್ಥರೊಬ್ಬರ ಕಾರು ಡಿಕ್ಕಿಯಾಗಿದ್ದು, ಆತನಿಗೆ ಖಾಸಗಿ ವೈದ್ಯರೊಬ್ಬರಿಂದ ಚಿಕಿತ್ಸೆ ಕೊಡಿಸಿ ಮನೆಗೆ ಕರದೊಯ್ಯಲಾಗಿತ್ತು. ಆದರೆ ರಾತ್ರಿ ಆತ ಮೃತಪಟ್ಟ. ಬಾಳೆಹೊನ್ನೂರು ಪೋಲೀಸರು ತನಿಖೆ ನಡೆಸಿದ್ದಾರೆ.

ಡಿ. 16ರಂದು ಇದೇ ಸ್ಥಳದ ಸಮೀಪದ ಹಳ್ಳದಲ್ಲಿ ಆಂಟೋನಿ ಮೇಸ್ತ್ರಿ ಎಂಬ ಮಧ್ಯವಯಸ್ಕ ಬಿದ್ದು ಮೃತಪಟ್ಟದ್ದು, ವಿಪರೀತ ಕುಡಿದ ಅಮಲಿನಲ್ಲಿ ಈತ ಈ ರೀತಿ ಅಪಮೃತ್ಯುವಿಗೆ ಈಡಾಗಿದ್ದಾಗಿ ಹೇಳಲಾಗಿದೆ. ಈತನಿಗೆ ಪತ್ನಿ, ಮತ್ತು 9 ಮಕ್ಕಳಿದ್ದಾರೆ.

### ಬೆಂಕಿ ಅನಾಹುತ

ಸುಮಾರು 2 ವಾರದ ಹಿಂದೆ ಇಲ್ಲಿಗೆ ಸಮೀಪದ ಬಲಗೋಡು ಹರಿಜನ ಕೇರಿಯಲ್ಲಿ ಮರಿಯ ಮತ್ತು ಚಿನ್ನಪ್ಪ ಎಂಬವರ ಮನೆಗಳಿಗೆ ಮಧ್ಯಾಹ್ನ ಆಕಸ್ಮಿಕವಾಗಿ ಬೆಂಕಿ ತಗುಲಿ ಎರಡು ಗುಡಿಸಲುಗಳೂ, ಅಲ್ಲಿದ್ದ ಎಲ್ಲಾ ಸರಕುಗಳು ಸಂಪೂರ್ಣ ಭಸ್ಮವಾದವು ಬೆಂಕಿ 3ನೆಯ ಮನೆಗೂ ತಾಗಿದ್ದು, ಸುತ್ತಮುತ್ತಲವರ ತೀವ್ರ ಪ್ರಯತ್ನದಿಂದ ನಂದಿಸಲಾಯಿತು. ನೊಂದವರಿಗೆ ಪರಿಹಾರಕ್ಕಾಗಿ ಅರ್ಜಿ ಸಲ್ಲಿಸಲಾಗಿದೆ.

## ಕುಟುಂಬ ಕಲ್ಯಾಣ ಬಹುಮಾನ ವಿಜೇತರು

ಕೊಪ್ಪ: ನವೆಂಬರ್ ತಿಂಗಳ "ಕುಟುಂಬ ಕಲ್ಯಾಣ ಅದೃಷ್ಟ ಬಹುಮಾನ" ಯೋಜನೆಯಲ್ಲಿ ಈ ತಾಲ್ಲೂಕಿನ ಕೆಳಕೊಪ್ಪ ಗ್ರಾಮದ ಶ್ರೀಮತಿ ಗೌರಮ್ಮ 1500 ರೂ. ಗಳ 2 ನೇ ಬಹುಮಾನವನ್ನು, ನ. ರಾ. ಪುರ ತಾಲ್ಲೂಕಿನ ಶ್ರೀಮತಿ ಅನ್ನಿಸ್ಸಾ ಜೋನಿ 1000 ರೂ. ಗಳ 3ನೇ ಬಹುಮಾನವನ್ನೂ ಕೊಪ್ಪ ತಾಲ್ಲೂಕಿನ ಶ್ರೀಮತಿ ಪದ್ಮಾವತಿ 500 ರೂ. ಗಳ 4ನೇ ಬಹುಮಾನವನ್ನೂ ಪಡೆದಿದ್ದಾರೆ.

### ಶಸ್ತ್ರ ಚಿಕಿತ್ಸಾ ಶಿಬಿರಗಳು

ಡಿ. 24 ರಂದು ಬಾಳೆಹೊನ್ನೂರು, ಮೇಲ್ಪಾಲ್, 27ರಂದು ಕೊಪ್ಪ, ಮುತ್ತಿನ ಕೊಪ್ಪ ಮತ್ತು 30 ರಂದು ನ. ರಾ. ಪುರ– ಇಲ್ಲಿ ಕುಟುಂಬ ಯೋಜನೆ ಶಸ್ತ್ರಚಿಕಿತ್ಸಾ ಶಿಬಿರಗಳು ನಡೆಯುತ್ತವೆ.

## ಶೃಂಗೇರಿ ತಾ॥ ಸಾ॥ಶಿ॥ಇ॥ ಲಿಪಿಕ ನೌಕರರ ಸಂಘ

ಶೃಂಗೇರಿ: ಶೃಂಗೇರಿ ತಾ॥ ಸಾರ್ವಜನಿಕ ಶಿಕ್ಷಣ ಇಲಾಖಾ ಲಿಪಿಕ ನೌಕರರ ಸಂಘ ಅಸ್ತಿತ್ವಕ್ಕೆ ಬಂದಿದ್ದು ಡಿ. 8ರಿಂದ ಅನಿರ್ದಿಷ್ಟ ಕಾಲ ಲೇಖನಿ ಮುಷ್ಕರವನ್ನು ಆರಂಭಿಸಿದ್ದು ತನ್ನ ಬೇಡಿಕೆಗಳನ್ನು ಈ ಕೂಡಲೇ ಈಡೇರಿಸಬೇಕೆಂದು ಸರ್ಕಾರವನ್ನು ಒತ್ತಾಯಿಸಿದೆ.

ತಾ॥ ಸಂಘಕ್ಕೆ 1986–87ನೇ ಸಾಲಿಗೆ ಈ ಕೆಳಕಂಡ ಕಾರ್ಯಕಾರಿ ಸಮಿತಿಯು ಆಯ್ಕೆಗೊಂಡಿದೆ. ಡಿ.ಎಸ್. ನಾಗಭೂಷಣ (ಅಧ್ಯಕ್ಷ), ಮಿರಾನ್ ಬಾಷ (ಉಪಾಧ್ಯಕ್ಷ) ಎಸ್. ಸತ್ಯನಾರಾಯಣ (ಕಾರ್ಯದರ್ಶಿ), ದೇವೇಗೌಡ (ಸಹಕಾರ್ಯದರ್ಶಿ), ಶ್ರೀಮತಿ ಭಾಗೀರಥಿ (ಖಜಾಂಚಿ), ಮತ್ತು ಬಸವರಾಧ್ಯ (ಸಂಚಾಲಕ).

## ಅಡಿಕೆ ಕೊನೆ ಕೆಲಸದ ನಿಪುಣ ಕಾರ್ಮಿಕನ ದುರ್ಮರಣಕ್ಕೆ ಸಂತಾಪ

ಸಿಗದಾಳ್: ಅಡಿಕೆ ಕೊನೆ ಕೆಲಸದಲ್ಲಿ ಉತ್ತಮ ನೈಪುಣ್ಯಹೊಂದಿದ್ದ ಬಿ. ಕಾಡಯ್ಯ (45)ಎಂಬ ಹರಿಜನ ವ್ಯಕ್ತಿಯೊಬ್ಬರು ಡಿ. 11 ರಂದು ಆಕಸ್ಮಿಕ ದುರ್ಮರಣಕ್ಕೀಡಾದರು. ಉತ್ತಮ ಜನಾನುರಾಗಿಯಾಗಿ, ಸಾರ್ವಜನಿಕ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಸ್ಫೂರ್ತಿಯ ಚಿಲುಮೆಯಂತೆ ಇದ್ದ ಈತನ ಸಾವು ಊರಿನ ಜನತೆಗೆ ದಿಗ್ಭ್ರಾಂತಿಯನ್ನುಂಟುಮಾಡಿದೆ.

ಡಿ. 14 ರಂದು ಸಂಜೆ ಇಲ್ಲಿನಡೆದ ಸಂತಾಪ ಸೂಚಕ ಸಭೆಯಲ್ಲಿ ಊರ ಜನತೆ ಈತನ ಸೇವೆಯನ್ನು ಕೊಂಡಾಡಿ ಅಶ್ರುತರ್ಪಣ ಸಲ್ಲಿಸಿದರು. ಆತನ ಕುಟುಂಬದ ಮುಂದಿನ ಜೀವನಕ್ಕಾಗಿ ಭದ್ರತಾ ನಿಧಿಯೊಂದನ್ನು ಸ್ಥಾಪಿಸಲು ಸಭೆ ತೀರ್ಮಾನಿಸಿತು.

## ಜೇನು ಸಾಕಣೆ ತರಬೇತಿ

ಕೊಪ್ಪ: 1987ರ ಜನವರಿ 1ರಿಂದ ಆರಂಭವಾಗಲಿರುವ 2 ತಿಂಗಳ ಅವಧಿಯ ಜೇನುಸಾಕಣೆ ತರಬೇತಿಗಾಗಿ ಅರ್ಜಿ ಕರೆಯಲಾಗಿದೆ. ಅಭ್ಯರ್ಥಿಗಳು ಕನಿಷ್ಠ 7ನೇ ತರಗತಿ ಓದಿದ್ದು, 18ರಿಂದ 35 ವರ್ಷದೊಳಗಿನವರಿರಬೇಕು. ತಿಂಗಳಿಗೆ 150 ರೂ. ಸ್ಟೈಪಂಡ್ ದೊರೆಯುತ್ತದೆ. 25.12.86ರೊಳಗೆ ಅರ್ಜಿ ಸಲ್ಲಿಸಬೇಕಾಗಿದ್ದು, ನಿಗದಿತ ಅರ್ಜಿ ಫಾರಂಗಳನ್ನು ಇಲ್ಲಿನ ಜೇನು ಸಾಕಾಣಿಕೆ ಕಚೇರಿಯಿಂದ ಕೆಲಸದ ವೇಳೆಯಲ್ಲಿ ಪಡೆಯಬಹುದು.

## ಬಿಲಗದ್ದೆ ನೀರು ಪೂರೈಕೆ ಮೋಟಾರ್ ಕೆಟ್ಟಿದೆ

ಬಿಲಗದ್ದೆ: ಕೊಪ್ಪ ತಾ॥ ಬಿಲಗದ್ದೆಯಲ್ಲಿರುವ ಗ್ರಾಮೀಣ ನೀರು ಪೂರೈಕೆ ಯೋಜನೆಯ ಬೋರ್‌ವೆಲ್‌ಗೆ ಅಳವಡಿಸಿದ್ದ ಮೋಟರ್ ಕೆಟ್ಟು ಹೋಗಿ 1 ತಿಂಗಳ ಮೇಲಾಗಿದ್ದು ಬಿಡಿಒ ಮತ್ತು ಪಿಎಚ್‌ಇ ಇಲಾಖೆಯವರಿಗೆ ತಿಳಿಸಿದರೆ "ಅದು ಪಂಚಾಯ್ತಿಯವರ ಜವಾಬ್ದಾರಿ"ಎಂತಲೂ, ಪಂಚಾಯ್ತಿಯವರಿಗೆ ತಿಳಿಸಿದರೆ, ಮೆಕ್ಯಾನಿಕ್ ಇಲ್ಲ, ಕಳಿಸಲು ಬರೆದಿದ್ದೇವೆ. ಎಂತಲೂ ಉತ್ತರ ಬರುತ್ತಿದೆ; ಇದರಿಂದ ಸುತ್ತಮುತ್ತಲ ನಾಗರಿಕರಿಗೆ, ಅದರಲ್ಲೂ ಶಾಲಾ ಮಕ್ಕಳಿಗೆ ಅತ್ಯಂತ ತೊಂದರೆಯಾಗಿದ್ದು. ಕೂಡಲೇ ದುರಸ್ತಿಗೆ ಏರ್ಪಾಡು ಮಾಡಬೇಕೆಂದು ಗ್ರಾಮಸ್ಥರು ಜಿಲ್ಲಾಧಿಕಾರಿಗಳಿಗೆ ಮನವಿ ಕಳಿಸಿದ್ದಾರೆ.

## ಹೆಸರು ಬದಲಾವಣೆ

ಕೆ.ಜಿ. ವಾಸಪ್ಪ, s/o ಗಿಡ್ಡೇಗೌಡ, ಅರಸಿನಹಳ್ಳಿ, ಬೆಟ್ಟಗೆರೆ ಗ್ರಾಮ — ಈ ಹೆಸರಿನವನಾದ ನಾನು, ನನ್ನ ಸ್ವಂತ ಇಚ್ಛೆಯ ಮೇರೆಗೆ ನನ್ನ ಹೆಸರನ್ನು ಕೆ. ಜಿ. ಸುರೇಶ s/o ಗಿಡ್ಡೇಗೌಡ, ಅರಸಿನಹಳ್ಳಿ, ಬೆಟ್ಟಗೆರೆ ಗ್ರಾಮ ಎಂಬುದಾಗಿ, ನರಸಿಂಹರಾಜಪುರ ಮುನ್ಸಿಫ್ ಮೆಜಿಸ್ಟ್ರೇಟ್ ನ್ಯಾಯಾಲಯದಲ್ಲಿ ಬದಲಾಯಿಸಿಕೊಂಡಿದ್ದೇನೆ ಮತ್ತು ಇನ್ನು ಮುಂದೆ ನನ್ನ ಎಲ್ಲಾ ವ್ಯವಹಾರಗಳನ್ನೂ ಇದೇ ಹೆಸರಿನಿಂದಲೇ ನಡೆಸುತ್ತೇನೆ.

**ಕೆ.ಜಿ. ಸುರೇಶ s/o ಗಿಡ್ಡೇಗೌಡ,**
ಅರಸಿನಹಳ್ಳಿ, ಬೆಟ್ಟಗೆರೆ ಗ್ರಾಮ,
ಶೃಂಗೇರಿ ತಾ॥

**ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್, ಅಚ್ಚು: ದೀವಟಿಗೆ ಅಚ್ಚುಕೂಟ, ಕೊಪ್ಪ**